

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1346

ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕಃ : 21-12-2018

ಉತ್ತರಿಸುವ ಸಚಿವರು: : ಲೋಕೋಪಯೋಗಿ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೊಳ್ಳೇಗಾಲ ಪ್ರವಾಸಿ ಮಂದಿರದಿಂದ ಕುರುಬನಕಟ್ಟೆ ರಸ್ತೆಗೆ ಸಂಪರ್ಕ ಕಲ್ಪಿಸುವ ರಸ್ತೆಯ ನಿರ್ಮಾಣವನ್ನು ಯಾವ ಯೋಜನೆ ಅಡಿ ಕೈಗೊಳ್ಳಲಾಗಿದೆ; ಇದರ ಅಂದಾಜು ವೆಚ್ಚ ಎಷ್ಟು; ಈ ರಸ್ತೆಯ ನಿರ್ಮಾಣ ಬಹಳ ನಿಧಾನಗತಿಯಿಂದ ನಡೆಯುತ್ತಿದ್ದು, ಸಾರ್ವಜನಿಕರಿಗೆ ತೊಂದರೆಯಾಗಿರುವುದು ಗಮನಕ್ಕೆ ಬಂದಿದೆಯೇ; ಕಾಮಗಾರಿಯ ವಿಳಂಬಕ್ಕೆ ಕಾರಣಗಳೇನು; | ಕೊಳ್ಳೇಗಾಲದಿಂದ ಕುರುಬನಕಟ್ಟೆ, ಅರೇಪಾಳ್ಯ ಮಾರ್ಗವಾಗಿ ಸುರಾಪುರ ಸೇರುವ ರಸ್ತೆಯು ಜಿಲ್ಲಾ ಮುಖ್ಯ ರಸ್ತೆ ಆಗಿದ್ದು 21.40 ಕಿ.ಮೀ. ಉದ್ದವಿದ್ದು, ಸರಪಳಿ 7.50 ಕಿ.ಮೀ. ನಲ್ಲಿ ಕುರುಬನಕಟ್ಟೆ ರಸ್ತೆಗೆ ಸಂಪರ್ಕ ಕಲ್ಪಿಸುತ್ತದೆ. ಪ್ರವಾಸಿ ಮಂದಿರದಿಂದ ಕುರುಬನಕಟ್ಟೆ ರಸ್ತೆ ಸರಪಳಿ 0.00 ರಿಂದ 2.00 ಕಿ.ಮೀ. ವರೆಗೆ ನಗರಸಭಾ ವ್ಯಾಪ್ತಿಗೆ ಒಳಪಟ್ಟಿರುತ್ತದೆ.<br><br>ಸದರಿ ರಸ್ತೆಯನ್ನು ನಗರೋತ್ಥಾನ ಹಂತ-2 ರಲ್ಲಿ ರೂ.232.54 ಲಕ್ಷಗಳಲ್ಲಿ 670 ಮೀ. ಕಾಮಗಾರಿಯು ಅಂತಿಮ ಹಂತದಲ್ಲಿರುತ್ತದೆ. ನಗರೋತ್ಥಾನ 3ನೇ ಹಂತದಲ್ಲಿ ರೂ.100.00 ಲಕ್ಷಗಳಲ್ಲಿ ಮುಂದುವರೆದ 500 ಮೀ. ರಸ್ತೆ ಅಭಿವೃದ್ಧಿ ಕಾಮಗಾರಿಗೆ ಕಾರ್ಯಾದೇಶ ನೀಡಲಾಗಿರುತ್ತದೆ. ಈ ರಸ್ತೆ ನಿರ್ಮಾಣ ಮಾಡುವಾಗ ಪುರಸಭೆ ವ್ಯಾಪ್ತಿಯಲ್ಲಿ ಮನೆಗಳನ್ನು ತೆರವು ಮಾಡಲಾಗಿದ್ದು, ಸದರಿಯವರು ನ್ಯಾಯಾಲಯದಲ್ಲಿ ದಾವೆ ಹೂಡಿರುವುದರಿಂದ ಹಾಗೂ ಪೈಪ್‌ಲೈನ್, ಮರಗಳ ತೆರವು, ಯು.ಜಿ.ಡಿ. ಪೈಪ್‌ಲೈನ್‌ಗಳನ್ನು ಬದಲಿ ಮಾಡಬೇಕಾಗಿರುವುದರಿಂದ ಕಾಮಗಾರಿ ಅನುಷ್ಠಾನದಲ್ಲಿ ವಿಳಂಬವಾಗಿರುತ್ತದೆ.<br><br>ಮುಂದುವರೆದು ಸದರಿ ರಸ್ತೆಯ ಸರಪಳಿ 2.00 ರಿಂದ 2.30, 4.70 ರಿಂದ 5.50, 6.25 ರಿಂದ 7.00 ಕಿ.ಮೀ. ವರೆಗೆ ಒಟ್ಟು 1.85 ಕಿ.ಮೀ. ರಸ್ತೆಯನ್ನು ಲೆಕ್ಕ ಶೀರ್ಷಿಕೆ 5054 ಜಿಲ್ಲಾ ಮುಖ್ಯ ರಸ್ತೆ ಸುಧಾರಣೆ ಅಡಿಯಲ್ಲಿ ರೂ.200.00 ಲಕ್ಷಗಳ ಅಂದಾಜು ಮೊತ್ತಕ್ಕೆ ಅನುಮೋದನೆಯಾಗಿರುತ್ತದೆ. ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡಿದ್ದು ಗುತ್ತಿಗೆದಾರರೊಡನೆ ಕರಾರು ಮಾಡಿಕೊಂಡು ಶೀಘ್ರವಾಗಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು ಹಾಗೂ ಸದರಿ ರಸ್ತೆಯ ಸರಪಳಿ 2.30 ರಿಂದ 3.50, 4.20 ರಿಂದ 4.70 ಮತ್ತು 7.00 ರಿಂದ 7.50 ಕಿ.ಮೀ. ಗಳವರೆಗೆ ಒಟ್ಟು 2.20 ಕಿ.ಮೀ. |
| ಆ) | ಕೊಳ್ಳೇಗಾಲದಿಂದ ಸುತ್ತಮುತ್ತ ಇರುವ ಸುಮಾರು ಹತ್ತು ಹಳ್ಳಿಗಳಿಗೆ ಸಂಪರ್ಕ ಕಲ್ಪಿಸುವ ಈ ರಸ್ತೆ ನಿರ್ಮಾಣ ಕಾರ್ಯವನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸಲು ಕ್ರಮ ಕೈ ಕೊಳ್ಳಲಾಗುವುದೇ? | |

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| | | ಉದ್ದಕ್ಕೆ ಲೆಕ್ಕ ಶೀರ್ಷಿಕೆ 5054 ಜಿಲ್ಲಾ ಮುಖ್ಯ ರಸ್ತೆ ಸುಧಾರಣೆ ಅಡಿಯಲ್ಲಿ ರೂ.300.00 ಲಕ್ಷ ಅಂದಾಜು ಮೊತ್ತಕ್ಕೆ ಅನುಮೋದನೆಯಾಗಿರುತ್ತದೆ. ಟೆಂಡರ್ ಪ್ರಕ್ರಿಯೆ ಆರಂಭವಾಗಿದ್ದು, ದಿನಾಂಕ 21-12-2018 ರಂದು ಟೆಂಡರ್ ಸ್ವೀಕರಿಸಲಾಗುವುದು. ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುವುದು.<br><br>ಬಾಕಿ ಉಳಿದಂತೆ ಸರಪಳಿ 3.50 ರಿಂದ 4.20 ಹಾಗೂ 5.50 ರಿಂದ 6.25 ಕಿ.ಮೀ. ಗಳಲ್ಲಿ ರಸ್ತೆ ಸುಸ್ಥಿಯಲ್ಲಿದ್ದು, ವಾಹನ ಸಂಚಾರಕ್ಕೆ ಯೋಗ್ಯವಾಗಿರುತ್ತದೆ. ಸರಪಳಿ 7.50 ರಿಂದ 21.40 ಕಿ.ಮೀ.ವರೆಗಿನ ರಸ್ತೆಯನ್ನು ವಾರ್ಷಿಕ ನಿರ್ವಹಣೆಯಡಿಯಲ್ಲಿ ರೂ. 2.00 ಲಕ್ಷ ವೆಚ್ಚದಲ್ಲಿ ನಿರ್ವಹಣೆ ಕೈಗೊಂಡು ರಸ್ತೆಯನ್ನು ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲಾಗುವುದು. |

**ಸಂಖ್ಯೆ:** ಲೋಇ 117 ಸಿಕ್ಯೂಎನ್ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು